ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಮಂಗಳವಾರ, ದಿನಾಂಕ: 2ನೇ ಫೆಬ್ರುವರಿ, 2021

ಬೀದರ್ ಜಿಲ್ಲೆಯ ಕೈಗಾರಿಕಾ ಪ್ರದೇಶದಲ್ಲಿ ಹಾಗೂ ಜಿಲ್ಲೆಯಲ್ಲಿ ಬಂಡವಾಳ ಹೂಡಿಕೆ ಬಗ್ಗೆ

ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು) :-

161(214) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

ಅ) ಜಿಲ್ಲೆಯಲ್ಲಿ 10 ವರ್ಷದಲ್ಲಿ ರಾಜ್ಯ ಉನ್ನತ ಮಟ್ಟದ ಸಮಿತಿಯು 7 ಯೋಜನೆಗಳಿಗೆ ಮಂಜೂರಾತಿ ನೀಡಿದ್ದು, ಅವುಗಳಲ್ಲಿ 3 ಯೋಜನೆಗಳು ಕಾರ್ಯರಂಭವಾಗಿದ್ದು 01 ಯೋಜನೆಯು ಕಾರ್ಯ ಪ್ರಗತಿಯಲ್ಲಿದ್ದು ಉಳಿದ 3 ಯೋಜನೆಗಳು ಅನುಷ್ಠಾನದಿಂದ ಹೊರಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮಗಳೇನು;

(ಆ) ಜಿಲ್ಲೆಯಲ್ಲಿ ಬಂಡವಾಳ ಆಕರ್ಷಿಸಲು ಕಾಂಪಿಟ್ ವಿತ್ ಚೈನಾ ಯೋಜನೆಯಡಿಯಲ್ಲಿ ಬೀದರ್ ಜಿಲ್ಲೆಯನ್ನು ಕೃಷಿ ಉತ್ಪನ್ನ ಉಪಕರಣಗಳ ಉತ್ಪಾದನಾ ವಲಯವನ್ನಾಗಿ ಘೋಷಿಸಿದ್ದರೂ ಇಲ್ಲಿಯವರೆಗೆ ಯಾವುದೇ ಪ್ರಗತಿ ಕಂಡು ಬಂದಿಲ್ಲದಿರುವುದರಿಂದ ಈ ಯೋಜನೆಯು ಯಾವ ಹಂತದಲ್ಲಿದೆ; ( ವಿವರ ನೀಡುವುದು)

(ಇ) ಜಿಲ್ಲೆಗೆ ರಾಜ್ಯ ಏಕಗವಾಕ್ಷಿ ಸಮಿತಿಯು ಕಳೆದ 10 ವರ್ಷಗಳಲ್ಲಿ 56 ಯೋಜನೆಗಳಿಗೆ ಮಂಜೂರಾತಿ ನೀಡಿದ್ದು, ಅವುಗಳಲ್ಲಿ 23 ಘಟಕಗಳು ಕಾರ್ಯಾರಂಭ ಮಾಡಿದ್ದು, ಇವುಗಳಲ್ಲಿ 260.71 ಬಂಡವಾಳ ಹೂಡಿಕೆಯಾಗಿದ್ದು, 18 ಯೋಜನೆಗಳು ಅನುಷ್ಠಾನದ ಹಂತದಲ್ಲಿದ್ದು ಉಳಿದ 16 ಯೋಜನೆಗಳು ಅನುಷ್ಠಾನದಿಂದ ಹಿಂದೆ ಸರಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮಗಳೇನು?